# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಬಿ. ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 385
ಉತ್ತರ ದಿನಾಂಕ : 11.12.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆ ಅಫಜಲಪೂರ ತಾಲ್ಲೂಕಿನ ಹಸರಗುಂಡಗಿ ಬಳಿ ಕೈಗೊಂಡ ಗ್ರಾಮೀಣ ನೀರು ಸರಬರಾಜು ಯೋಜನೆ ಕಾಮಗಾರಿ ಅರ್ಧಕ್ಕೆ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಅಫಜಲಪೂರ ತಾಲ್ಲೂಕಿನ ಹಸರಗುಂಡಗಿ, ಕಿರುಸಾವಳಗಿ, ಸಿರಸಗಿ, ಸೇರಿ ಏಳು ಹಳ್ಳಿಗಳಿಗೆ ಭೀಮಾ ನದಿಯಿಂದ ನೀರು ಪೂರೈಕೆಗೆ ಜಾಕ್‌ವೆಲ್ ನಿರ್ಮಿಸಿ ಶುದ್ಧೀಕರಣ ಘಟಕದ ಮೂಲಕ ನೀರು ಪೂರೈಕೆಗೆ 3 ಕೋಟಿ ವೆಚ್ಚದ ಕಾಮಗಾರಿಯು ಯಾವಾಗ ಪೂರ್ಣಗೊಳ್ಳಲಿದೆ; (ವಿವರ ನೀಡುವುದು) | ಸದರಿ ಯೋಜನೆಯು ಜಲನಿರ್ಮಲ್ ಯೋಜನೆಯಡಿ ಅಂದಾಜು ಮೊತ್ತ ರೂ.262.50ಲಕ್ಷಗಳಿಗೆ ಅನುಮೋದನೆಗೊಂಡಿದ್ದು, ಸಂಬಂಧಪಟ್ಟ ಗ್ರಾಮ ಪಂಚಾಯತಿಯಿಂದ ಟೆಂಡರ್ ಕರೆಯಲಾಗಿ ಗುತ್ತಿಗೆದಾರರಾದ ಶ್ರೀ.ಮಹದೇವ್ ಗುತ್ತೆದಾರ್ ಇವರಿಗೆ ರೂ.277.22ಲಕ್ಷಕ್ಕೆ ವಹಿಸಲಾಗಿತ್ತು. ಸದರಿಯವರು ಕಾಮಗಾರಿಯನ್ನು ಪೂರ್ಣಗೊಳಿಸದೆ ಅರ್ಧದಲ್ಲಿ ಬಿಟ್ಟು ಹೋಗಿದ್ದು, ಕಾಮಗಾರಿಯಡಿ ರೂ.147.00ಲಕ್ಷಗಳ ವೆಚ್ಚವಾಗಿರುತ್ತದೆ.<br><br>ಪ್ರಸ್ತುತ ಯೋಜನೆಗೆ ಪರಿಗಣಿಸಿರುವ ಜಲಮೂಲದ ಸುಸ್ಥಿರತೆಯನ್ನು ಖಚಿತಪಡಿಸಿಕೊಂಡು ಬಾಕಿಯಿರುವ ಕಾಮಗಾರಿಗಳಿಗಾಗಿ ಅಂದಾಜು ಪಟ್ಟಿಯನ್ನು ತಯಾರಿಸಲು ಅಗತ್ಯ ಕ್ರಮವಹಿಸಲಾಗುವುದು.<br><br>ಪರ್ಯಾಯವಾಗಿ ಈ ಯೋಜನೆಯಡಿ ಉದ್ದೇಶಿತ ಎಲ್ಲಾ ಗ್ರಾಮಗಳಿಗೆ ವಿವಿಧ ಲೆಕ್ಕಶೀರ್ಷಿಕೆಗಳಡಿ ಕೊಳವೆ ಬಾವಿಗಳನ್ನು ಕೊರೆದು ಸದರಿ ಯೋಜನೆಯಲ್ಲಿ ನಿರ್ಮಾಣಗೊಂಡ ಓ.ಎಚ್.ಟಿಗಳನ್ನು ಉಪಯೋಗಿಸಿ ಗ್ರಾಮಗಳಿಗೆ ಕುಡಿಯುವ ನೀರು ಸರಬರಾಜು ಮಾಡಲಾಗುತ್ತಿದೆ. |
| ಇ) | 3 ಕೋಟಿ ವೆಚ್ಚದ ಕಾಮಗಾರಿಯಲ್ಲಿ ಗುತ್ತಿಗೆದಾರರು ಈಗಾಗಲೇ 1.40 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿಸಿಕೊಂಡು ಕಾಮಗಾರಿಯನ್ನು ಅರ್ಧಕ್ಕೆ ಬಿಟ್ಟು ಹೋಗಿದ್ದು, ಸದರಿ ಕುಡಿಯುವ ನೀರಿನ ಯೋಜನೆಯನ್ನು ಪೂರ್ಣಗೊಳಿಸಲಾಗುವುದು ಯಾವಾಗ; ಕಾಮಗಾರಿಯನ್ನು ಅರ್ಧಕ್ಕೆ ಬಿಟ್ಟು ಹೋಗಿರುವ ಗುತ್ತಿಗೆದಾರರ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು? (ವಿವರ ನೀಡುವುದು) | ಸದರಿ ಕಾಮಗಾರಿಯನ್ನು ಕೂಡಲೇ ಪೂರ್ಣಗೊಳಿಸುವಂತೆ ಗುತ್ತಿಗೆದಾರರಿಗೆ ಪದೇ ಪದೇ ನೋಟಿಸ್ ನೀಡಿದ್ದರೂ ಸಹ ಗುತ್ತಿಗೆದಾರರು ಕಾಮಗಾರಿಯನ್ನು ಪೂರ್ಣಗೊಳಿಸದೆ ಇದ್ದರಿಂದ, ಟೆಂಡರ್ ನಿಯಮಾವಳಿಯ ಪ್ರಕಾರ ಗ್ರಾಮ ಪಂಚಾಯಿತಿಯಿಂದ ಗುತ್ತಿಗೆದಾರರ ಎಫ್.ಎಸ್.ಡಿ.ಯನ್ನು ಮುಟ್ಟುಗೋಲು ಹಾಕಿಕೊಂಡು ಕಾಮಗಾರಿಯ ಟೆಂಡರ್‌ನ್ನು ದಿನಾಂಕ:20.01.2015ರಂದು ರದ್ದುಗೊಳಿಸಲಾಗಿದೆ. |

ಸಂ:ಗ್ರಾಕುನೀ&ನೈಇ 118 ಗ್ರಾನೀಸ(4)2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು